# ತರಂಗ

[illegible] 17-23, 1985 ರೂ. 1-80

## ಮಕ್ಕಳ ಬುದ್ಧಿಮಾಂದ್ಯತೆಗೆ ಏನು ಮದ್ದು ?

ಮುಖಪುಟ
ಬುದ್ಧಿಮಾಂದ್ಯತೆ
ವರ್ಣಚಿತ್ರ:
ಗುಲ್ವಾಡಿ ಸ್ಟುಡಿಯೋ, ಶಿವಮೊಗ್ಗ
ಬ್ರಿಟಿಷ್ ರಾಜನ ಪ್ರತಿಮೆ
ವರ್ಣಚಿತ್ರ: ಎನ್. ಸಿ. ದೇಸಾಯಿ

ವಿನ್ಯಾಸ: ಜಯದೇವ

## ಮೂಲೆಯಲ್ಲಿ ಕೊಳೆಯುತ್ತಿರುವ ಬ್ರಿಟಿಷ್ ರಾಜರಾಣಿಯರ ಪ್ರತಿಮೆಗಳು



## ರಾಜಕೀಯ ಒಂದು ಉದ್ಯಮವೆ ?

ಹೊಸ

# ದುಗ್ಧಯುಕ್ತ ಫೆರೆಕ್ಸ್ ಘನ ಆಹಾರ

## ಅಧಿಕ ರುಚಿಕರ ಅಧಿಕ ಸಂಪೂರ್ಣ




**ನೀವು ಅಕ್ಕರೆಯಿಂದ ಕೊಡುವ ಪ್ರತಿಯೊಂದು ತುತ್ತು ನಿಮ್ಮ ಮಗುವಿನ ಬೆಳವಣಿಗೆಗೆ ಒಳ್ಳೆಯದು.**

ದುಗ್ಧಯುಕ್ತ ಫೆರೆಕ್ಸ್ ಘನ ಆಹಾರ. ಮಿಶ್ರಗೊಳಿಸುವುದು ಸುಲಭ ಉಣಿಸುವುದು ಸುಲಭ.

ದುಗ್ಧಯುಕ್ತ ಫೆರೆಕ್ಸ್ ಘನ ಆಹಾರ. ಮಗುವಿನ ಬೆಳವಣಿಗೆಗೆ ಅತ್ಯಂತ ಅವಶ್ಯಕವಾದ ಪ್ರೋಟೀನ್‌ನಿಂದ ಸಮೃದ್ಧ. ಆರೋಗ್ಯಕರ ರಕ್ತಕ್ಕಾಗಿ ಅಧಿಕ ಕಬ್ಬಿಣ ಸತ್ವ. ಗಟ್ಟಿಯಾದ ಹಲ್ಲು ಹಾಗೂ ಎಲುಬುಗಳಿಗಾಗಿ ಇದರಲ್ಲಿ ಕ್ಯಾಲ್ಸಿಯಮ್ ಹಾಗೂ ಫಾಸ್ಫರಸ್ ಯೋಗ್ಯ ಪ್ರಮಾಣದಲ್ಲಿವೆ. ಮಗುವಿನ ಕೋಮಲ ಪಚನ ಶಕ್ತಿಗೆ ಸರಿಹೊಂದುವಂತೆ ಮೊದಲೇ ಬೇಯಿಸಲ್ಪಟ್ಟಿದೆ.

ದುಗ್ಧಯುಕ್ತ ಫೆರೆಕ್ಸ್ ಘನ ಆಹಾರ. ಪ್ರತಿಯೊಂದು ತುತ್ತಿನಲ್ಲಿ ಅಧಿಕ ಸಂಪೂರ್ಣ ಘನ ಆಹಾರ.

# ಮೂಲೆಯಲ್ಲಿ ಕೊಳೆಯುತ್ತಿರುವ ಬ್ರಿಟಿಷ್ ರಾಜರಾಣಿಯರ ಪ್ರತಿಮೆಗಳು

**ಮುಂಬೈ** ಮಹಾನಗರದಲ್ಲಿ, ಜೀಜಾಮಾತಾ ಉದ್ಯಾನ ನೋಡಬೇಕಾದ ಸ್ಥಳ. ಇದು ಮೊದಲು 'ವಿಕ್ಟೋರಿಯಾ ಗಾರ್ಡನ್' ಎಂದು ಕರೆಯಲ್ಪಡುತ್ತಿತ್ತು. ಸಸ್ಯ ಸಂಗ್ರಹವೂ, ಪ್ರಾಣಿ ಸಂಗ್ರಹಾಲಯವೂ ಆಗಿದೆ ಈ ಸ್ಥಾನ. ಉದ್ಯಾನದ ಒಳಗೆ ಪ್ರವೇಶಿಸುತ್ತಿದ್ದಂತೆ ಎಡ ಬದಿಯಲ್ಲಿ ಒಂದು ಎತ್ತರವಾದ ಕಟ್ಟಡ, ಅದೊಂದು ವಸ್ತು ಸಂಗ್ರಹಾಲಯ. ಹಿಂದೆ ಅಲ್ಬರ್ಟ್ ಮ್ಯುಜಿಯಮ್ ಎಂದು ಕರೆಯುತ್ತಿದ್ದ ಈ ಸಂಗ್ರಹಾಲಯದ ಹೆಸರು "ಡಾ॥ ಬಾಹುದಾಜಿ ಲಾಡ ವಸ್ತು ಸಂಗ್ರಹಾಲಯ" ಎಂದು ಬದಲಾಗಿದೆ, ಈಗ!

ಈ ವಸ್ತು ಸಂಗ್ರಹಾಲಯದ ಪ್ರವೇಶದ್ವಾರದತ್ತ ನೀವು ಮುಖ ಮಾಡಿ ನಿಂತರೆ – ನಿಮ್ಮ ಬಲಗಡೆಯಲ್ಲಿ – ಅಂದರೆ ಆ ಕಟ್ಟಡದ ಎಡಬದಿಯಲ್ಲಿ ಗೋಡೆಗೆ ಸ್ವಲ್ಪ ಅಂತರದಲ್ಲಿ ಸಾಲಾಗಿ – ಬೃಹದಾಕಾರದ ಕೆಲವು ಹಾಲುಗಲ್ಲಿನ ಮೂರ್ತಿಗಳನ್ನೂ ಕೆಲವು ಲೋಹದ ಮೂರ್ತಿ

● ಚಿತ್ರ-ಲೇಖನ : ಎನ್.ಸಿ. ದೇಸಾಯಿ

ಎರಡು ಶತಮಾನಗಳ ಕಾಲ ಬ್ರಿಟಿಷರು ನಮ್ಮನ್ನು ಆಳಿದ್ದು ಈಗ ಇತಿಹಾಸ. ಬ್ರಿಟಿಷರ ರಾಜ್ಯಭಾರದ ಕಾಲದಲ್ಲಿ ದೇಶದ ಮುಖ್ಯ ಪಟ್ಟಣಗಳ ಪ್ರಾಮುಖ್ಯ ಸ್ಥಳಗಳಲ್ಲಿ ಅವರ ರಾಜ-ರಾಣಿಯರ, ವೈಸರಾಯಿಗಳ ಪ್ರತಿಮೆಗಳು ರಾರಾಜಿಸಿದವು. ಸ್ವಾತಂತ್ರ್ಯಾನಂತರದ ದಿನಗಳಲ್ಲೂ ಇವು ತಮ್ಮ ಸ್ಥಾನದಿಂದ ಕದಲದೇ ಸ್ಥಿರವಾಗಿ ನಿಂತದ್ದು ದೇಶಭಕ್ತರ ಕಣ್ಣುಗಳನ್ನು ಕೆಂಪಾಗಿಸಿದ್ದವು. ಪರಿಣಾಮ ಈ ಪ್ರತಿಮೆಗಳ ಸ್ಥಳಾಂತರ. ಅಲಕ್ಷ್ಯದಿಂದ ನಾಶ.

ಮುಂಬಯಿಯ ಜೀಜಾಬಾಯಿ ಉದ್ಯಾನದಲ್ಲಿ ಹೀಗೆ ಮೂಲೆಪಾಲಾಗಿರುವ ಬ್ರಿಟಿಷ್ ರಾಜ-ರಾಣಿಯರ ಪ್ರತಿಮೆಗಳು ದಿವ್ಯ ಅಲಕ್ಷ್ಯಕ್ಕೆ ಗುರಿಯಾಗಿವೆ. ಈ ಪ್ರತಿಮೆಗಳನ್ನು ಸ್ಥಳಾಂತರಿಸಿದ್ದೇನೊ ಸರಿ. ಆದರೆ ಶ್ರೇಷ್ಠ ಕಲಾವಮಾದರಿಗೆ ಸಾಕ್ಷಿಯಾಗಿರುವ ಈ ಪ್ರತಿಮೆಗಳನ್ನು ಕಲಾ ಸಂಗ್ರಹಾಲಯಗಳಿಗೆ ನೀಡಬಾರದೇ? ಅವುಗಳ ನಾಶ ಅನಿವಾರ್ಯವೇ? ಕೇವಲ ಮೂರ್ತಿಗಳ ನಾಶದಿಂದ ಚರಿತ್ರೆಯನ್ನು ಬದಲಾಯಿಸುವುದು ಸಾಧ್ಯವೇ?

ಮೂರ್ತಿ ಸ್ಥಾಪಿತವಾಗಿದ್ದ ಸ್ಥಳ : ಎಲಿಫನ್‌ಸ್ಟನ್ ಕಾಲೇಜು.



ದಿ ಪ್ರಿನ್ಸ್ ಆಫ್ ವೇಲ್ಸ್ ಎಂಟನೆಯ ಎಡ್ವರ್ಡ್. ಈ ಮೂರ್ತಿಯನ್ನು ಸ್ಥಾಪಿಸಿದವರು ಎಚ್. ಯಂಗ್ ಮತ್ತು ಕಂಪನಿ ಲಂಡನ್, ಮೂರ್ತಿಕಾರ ಜೆ. ಈ. ಬೊಹ್ಮ. ಸ್ಥಾಪನೆ – 1877. ಈ ಮೂರ್ತಿ ಈಗಿನ ಜಹಾಂಗೀರ ಆರ್ಟ್ ಗ್ಯಾಲರಿ ಹಾಗೂ ಎಲಿಫನ್‌ಸ್ಟನ್ ಕಾಲೇಜ್ ಎದುರಿಗಿತ್ತು. ಮೂರ್ತಿ ಕಪ್ಪು ಬಣ್ಣದಿದ್ದುದರಿಂದ ಈ ಭಾಗಕ್ಕೆ 'ಕಾಲಾಘೋಡಾ' ಎಂದು ಕರೆಯುತ್ತಿದ್ದರು.



ಗಳನ್ನೂ ಕಾಣುತ್ತೀರಿ. ನೀವು ಕಲಾಪ್ರಿಯರಾಗಿದ್ದರೆ, ಅವನ್ನು ನೋಡಿ ಮರುಗುತ್ತೀರಿ, ಎಂಥಾ ಸುಂದರವಾದ ಕಲಾಕೃತಿಗಳಿವು! ಆದರೆ ಅವುಗಳಿಗೆ ಈ ದುರವಸ್ಥೆಯೇ ಎಂದು ಹಳಹಳಿಸದೇ ಇರಲಾರಿರಿ!!

ಈ ಮೂರ್ತಿಗಳೆಲ್ಲ – ಆಂಗ್ಲರ ರಾಜ-ರಾಣಿಯರವು, ವೈಸ್‌ರಾಯ್, ಗವರ್ನರ್ ಮುಂತಾದ ಮಹಾನ್ ವ್ಯಕ್ತಿಗಳವೇ ಆಗಿವೆ.

ಅವನ್ನು ನೋಡುತ್ತಿದ್ದಂತೆಯೇ ಒಂದೊಂದು ಪ್ರತಿಮೆಯೂ ಒಂದೊಂದು ಕತೆ ಹೇಳುತ್ತದೆ. ಅವನ್ನು ನಿಟ್ಟಿಸುತ್ತಿದ್ದ ನನಗಂತೂ, ಅವು ಇನ್ನೂ ಮೂರ್ತಿಗಳಾಗಿ ನಿರ್ಮಾಣವಾಗಬೇಕಿದ್ದ ಕಲ್ಲುಬಂಡೆಯಾಗಿ ಮೊದಲು ಮನದ ಪಟದ ಮೇಲೆ ಮೂಡಿದವು. ಆಮೇಲೆ ಮೆಲ್ಲಗೇ ಅವನ್ನು ಕಟೆದ ರೂವಾರಿಯ ನೆನಹು ನೀಡಿದವು. ಮೆಲ್ಲಮೆಲ್ಲನೆ ಅವು ರೂಪುಗೊಳ್ಳುವುದನ್ನು ಕಂಡೆ. ವಿವರವಾಗಿ ಮೂರ್ತಿಗಳಲ್ಲಿಯ ಅಲಂಕಾರ ವಸ್ತುಗಳು, ಬಟ್ಟೆಬರೆ, ಕಣ್ಣು ಕೂದಲು, ಆಸನಗಳ ಸೂಕ್ಷ್ಮನಕ್ಷೆ, ಬೊಟ್ಟು, ಉಗುರು, ಉಂಗುರ ಈ ರೀತಿಯ ವಿವರವಾದ ಕೆತ್ತನೆಯ ಕಾರ್ಯದೆಡೆಗೆ ನನ್ನ ಮನಸ್ಸು ನೂರಾರು ವರ್ಷಗಳ ಹಿಂದಿನ ಸಂದರ್ಭಕ್ಕೆ ಓಡಿ ಹೋಯಿತು. ಆಗ ಅವರು ಈ ಮೂರ್ತಿಗಳನ್ನು ನಿರ್ಮಿಸಲು ಉಪಯೋಗಿಸಿದ ಕುಶಲತೆಯೆಡೆಗೆ ಹೃದಯ ಹಾರಿತು. ಇಂದಿಗೂ ಅವು ಅತ್ಯಂತ ಕಲಾಪೂರ್ಣವಾದ ವ್ಯಕ್ತಿಗಳ ಶಿಲ್ಪಗಳು. ಈ ಮಾತುಗಳನ್ನು ನಾನಷ್ಟೇ ಅಲ್ಲ ಅವನ್ನು ನೋಡುವ ಯಾರೂ ಹೇಳುವ ಮಾತುಗಳಿವು.

ಇಂಥ ಕಲಾಪೂರ್ಣವಾದ ಮೂರ್ತಿಗಳನ್ನು ನಗರದ ಒಂದು ಮೂಲೆಯಲ್ಲಿ ಅಲಕ್ಷ್ಯವಾಗಿ ಇಟ್ಟಿರುವದನ್ನು ನೋಡಿದಾಗ ಮನಸ್ಸಿಗೆ ನೋವಾಗುತ್ತದೆ. ನಿಜ, ಅವೆಲ್ಲ ನಮ್ಮನ್ನು ನೂರಾರು ವರ್ಷಗಳ ಕಾಲ ಗುಲಾಮಗಿರಿಯಲ್ಲಿಟ್ಟು, ಭಾರತದಲ್ಲಿ ಸಾಮ್ರಾಜ್ಯವನ್ನು ಸ್ಥಾಪಿಸಿ, ನಮ್ಮನ್ನಾಳಿದ ಆಂಗ್ಲಜನರ ಮೂರ್ತಿಗಳೇನೋ ಅಹುದು. ಆದರೆ, ಅವರು ಕೂಡ ಈ ದೇಶವನ್ನು ಆಳಿದವರು, ಭಾರತದ ಇತಿಹಾಸದಲ್ಲಿ ಅವರನ್ನೂ ನಾವು ಮರೆಯುವಂತಿಲ್ಲ, ಅಂದಮೇಲೆ ಮೂರ್ತಿಗಳು ಕೂಡ ಐತಿಹಾಸಿಕ ಕುರುಹುಗಳಲ್ಲವೆ? ಸರಿ, ಅವನ್ನು ಮೊದಲಿದ್ದ ನಗರದ ಮಹತ್ವದ ಸ್ಥಳದಲ್ಲಿ ಇರಿಸುವುದು ಬೇಡವಾದರೂ, ಈ ರೀತಿ ಬಿಸಾಡುವುದೂ ಉಚಿತವಲ್ಲ! ಇಂದು ಧೂಳು ತಿನ್ನುತ್ತಿರುವ ಈ ಐತಿಹಾಸಿಕ ಕುರುಹುಗಳು, ಜೀಜಾಮಾತಾ ಉದ್ಯಾನಕ್ಕೆ ಬಂದು ವಿಶ್ರಾಂತಿ ಪಡೆಯುವ ಆಲಸೀ ಜನರ ಬೆನ್ನಿಗೆ ಆಸರೆಯಾಗಿವೆ.

ಇಂತಹ ಹತ್ತು ಮೂರ್ತಿಗಳ ಸಾಲು ಅಲ್ಲಿದೆ. ಅವುಗಳಲ್ಲಿ ಹೆಚ್ಚಿನವು ಹಾಲುಗಲ್ಲಿನ ಮೂರ್ತಿಗಳೇ. ಭಿನ್ನವಾಗಿವೆ – ಧಾತುವಿನ ಮೂರ್ತಿಗಳನ್ನು ಅಷ್ಟು ಸಲೀಸಾಗಿ ವಿದ್ರೂಪಗೊಳಿಸಲು ಸಾಧ್ಯವಿರಲಿಲ್ಲವೆಂದೇನೋ. ಧಾತುವಿನ ಮೂರ್ತಿಗಳು ಹೆಚ್ಚಾಗಿ ಮುಕ್ಕಾಗಿಲ್ಲ.

ಆಂಗ್ಲರು ಭಾರತಕ್ಕೆ ವ್ಯಾಪಾರಿಗಳಾಗಿ ಬಂದು ಸಂಪೂರ್ಣ ಸಾಮ್ರಾಜ್ಯ ಸ್ಥಾಪಿಸುವಲ್ಲಿ ಸಮರ್ಥರಾದರು. ತಮಗೆ ಬೇಕಾದುದನ್ನು ಮಾಡಲೂ ಅವರು ಸಮರ್ಥರೇ




ಮೊದಲು ಮೂರ್ತಿ ಇದ್ದ ಸ್ಥಳ – ಗೇಟ್‌ವೇ ಆಫ್ ಇಂಡಿಯಾ ಬಳಿ. ಈಗ ಈ ಮೂರ್ತಿ ಇದ್ದ ಸ್ಥಳದಲ್ಲಿಯೇ ಸ್ವಾಮಿ ವಿವೇಕಾನಂದರ ಪುತ್ಥಳಿ ಸ್ಥಾಪಿತವಾಗಿದೆ.



ಲಾರ್ಡ್ ಎಚ್. ಹಾರ್ಡಿಂಜ್
ಮೂರ್ತಿಯ ಶಿಲ್ಪಿ : ಎಚ್. ಹಾವ್ಪಟನ್. ಲಂಡನ್. ಈ ಮೂರ್ತಿಯ ಹಿಂದು ಮುಂದು ಸಿಂಹ, ಸಿಂಹಿಣಿ - ಮೂರ್ತಿಗಳಿದ್ದು ಅವು ಇಂದು ಆಲ್ಬರ್ಟ್ ಮಸ್ತು ಸಂಗ್ರಹಾಲಯದ ಮುಂದಿವೆ.



ಎಡ್ವಿನ್ ಮೊಂಟ್ಯಾಗ್
ಕಲಾಕಾರ : ಆರ್. ರಿಕಾರ್ಡ್. ಈ ಮೂರ್ತಿ ಕ್ರಾಸ್ ಮೈದಾನದಲ್ಲಿ ಸ್ಥಾಪಿತವಾಗಿತ್ತು.

# ಬ್ರಿಟಿಷರ ಎಲ್ಲ ಮೂರ್ತಿಗಳೂ - ಉದ್ಯಾನಕ್ಕೆ ಬಂದಿಲ್ಲ

ಬ್ರಿಟಿಷರ ಕಾಲದಲ್ಲಿ ಸ್ಥಾಪಿತವಾದ ಎಲ್ಲ ಮೂರ್ತಿಗಳೂ ಇಲ್ಲಿಗೆ ಸಾಗಿಸಲ್ಪಟ್ಟಿಲ್ಲ. ಎಷ್ಟೋ ಮೂರ್ತಿಗಳು ಆ ಕಾಲದಲ್ಲಿ ಸ್ಥಾಪಿತವಾದ ಮಹತ್ವದ ಸ್ಥಳಗಳಲ್ಲಿಯೇ ವಿರಾಜಿಸುತ್ತಿವೆ.

ಜೀಜಾಮಾತಾ ಉದ್ಯಾನಕ್ಕೆ ಸಾಗಿಸಲ್ಪಟ್ಟವು ಈ ಬರಹದಲ್ಲಿ ವಿವರಿಸಿದ 10 ಮೂರ್ತಿಗಳು ಮಾತ್ರ. ಕೆಲವು ಭಾರತೀಯ 'ದೇಶಭಕ್ತ'ರಿಂದ ಮುಕ್ಕಾಗಿದ್ದರೆ ಇನ್ನು ಕೆಲವು ಅವಸರದಲ್ಲಿ ಅವುಗಳು ಇದ್ದ ಸ್ಥಳಗಳಿಂದ ಉದ್ಯಾನಕ್ಕೆ ಸಾಗಿಸುವಾಗ ನೌಕರರ ಇಲ್ಲವೆ ಗುತ್ತಿಗೆದಾರನ ಅಜಾಗ್ರತೆಯಿಂದ ಹಾಳಾಗಿರುವ ಸಂಭವವಿದೆ.

ಅಂತೂ ಕಲಾಕೃತಿಗಳ ಕೊಲೆಯಾದುದು ನಿಜ. ಭಾಷೆ ಯಾವುದಾದರೇನು, ದೇಶ ಯಾವುದೇ ಇರಲಿ – ಈ ಮೂರ್ತಿಗಳು ವೈರಿಗಳವೇ ಇರಲಿ ಇವು ಮಾತ್ರ ಮೇರು ಕಲಾಕೃತಿಗಳು, ಮಹತ್ವದ ಐತಿಹಾಸಿಕ ಕುರುಹುಗಳು ಎಂಬುದನ್ನು ನಾವು ಮರೆಯುವಂತಿಲ್ಲ.



ವಿಕ್ಟೋರಿಯಾ ಮಹಾರಾಣಿಯ ಮುಕ್ಕಾದ ಮುಖ - ರುಂಡವೂ ತುಂಡಾಗಿದೆ. ಇದು ಇಂದು 'ಓವರ್‌ಸೀಸ್ ಕಮ್ಯುನಿಕೇಶನ್' ಕಟ್ಟಡವಿರುವ ಸ್ಥಳದಲ್ಲಿ ಇದ್ದ ಪ್ರತಿಮೆ.
ಮೂರ್ತಿಕಾರ ಎನ್. ನೋಬಲ್.

ಆಗಿದ್ದರು. ಅಂದ ಮೇಲೆ ಆಳರಸರ, ಹಿರಿಯ ಅಧಿಕಾರಿಗಳ ಮೂರ್ತಿಗಳನ್ನು ಅವರು ಭಾರತದ ಯಾವುದೇ ನಗರದ ಮಹತ್ವದ ಸ್ಥಳಗಳಲ್ಲಿ ಸ್ಥಾಪಿಸಲು ಅವರಿಗೇನು ತೊಂದರೆಯಿತ್ತು? ಈಗ ಇಲ್ಲಿ ಜೀಜಾಮಾತಾ ಉದ್ಯಾನದಲ್ಲಿ ತಂದಿರಿಸಿದ ಅಂಥ ಮೂರ್ತಿಗಳೆಲ್ಲ ಮುಂಬಯಿ ಮಹಾನಗರದ ಅತ್ಯಂತ ಮಹತ್ವದ ಸ್ಥಳವಾದ ಫ್ಲೋರಾ ಫೌಂಟನ್, ಚರ್ಚ್‌ಗೇಟ್ ಭಾಗದಲ್ಲಿ ಮೂರ್ತಿಮಂತವಾಗಿ ನಿಂತಿದ್ದವು!

## ಅಸಹನೆ

ಭಾರತೀಯರಲ್ಲಿ ಸ್ವಾತಂತ್ರ್ಯದ ಭಾವನೆ ತಲೆದೋರಿದಂತೆ, ಆಂಗ್ಲರ ಈ ತರದ ವೈಭವ ಅವರ ಮನಸ್ಸನ್ನು ನೋಯಿಸಿದ್ದು ಸಹಜ. ಆದರೆ ಆ ನೋವನ್ನು ಬಹಿರಂಗವಾಗಿ ತೋರಿಸಲೂ ಸಾಧ್ಯವಿರಲಿಲ್ಲ. ಹಾಗೆ ಮಾಡಿದರೆ ಶಿಕ್ಷೆಗೋ, ಮರಣದಂಡನೆಗೋ ಗುರಿಯಾಗಬೇಕಾದ ಪ್ರಸಂಗಗಳು ಬರಬಹುದಿತ್ತು. ಆದರೂ, ಕದ್ದು ಮುಚ್ಚಿ ಹಾಗೆ ಮಾಡಿದ್ದೂ ಉಂಟು. ಇಂದು 'ಸಿಟಿಓ'ದ ಪಕ್ಕದಲ್ಲಿ 'ಓವರ್‌ಸೀಸ್ ಕಮ್ಯುನಿಕೇಶನ್' ಗಗನಚುಂಬಿ ಕಟ್ಟಡ ಒಂದಿದೆ. ಅದೇ ಸ್ಥಳದಲ್ಲಿ ವಿಕ್ಟೋರಿಯಾ ಮಹಾರಾಣಿಯ ಮೂರ್ತಿ 42 ಅಡಿಯ ಸಿಂಹಾಸನದಲ್ಲಿ ಆಸೀನವಾಗಿತ್ತು. ಆ ಮೂರ್ತಿಯ ಮುಖಕ್ಕೆ ಕ್ರಿ.ಶ. 1896ರಲ್ಲಿ ಡಾಂಬರು ಸುರಿದು, ಮೇಲೆ ಸುಣ್ಣ ಹಾಕಿದ್ದರಂತೆ! ಹೀಗೆ ಸಂಭವಿಸಿದ ಕಪ್ಪುಕಲೆಯನ್ನು ತೆಗೆಯಲಾಗದಿದ್ದರಿಂದ, ಆ ಮೂರ್ತಿಯನ್ನು ಕೆಲಕಾಲ ಸಾರ್ವಜನಿಕರ ದೃಷ್ಟಿಗೆ ಬೀಳದಂತೆ ಮಾಡಲಾಗಿತ್ತು ಹಾಗೂ ಆ ಕಲೆಯನ್ನು ನಿರ್ಮೂಲಗೊಳಿಸಲು ವಿಶ್ವಪ್ರಯತ್ನ ನಡೆದು ಕೊನೆಗೆ ಮುಂಬೈಯವರೇ ಒಬ್ಬರು ಸರಿಯಾದ ರಸಾಯನವನ್ನು ಹುಡುಕಿ ಸ್ವಚ್ಛ ಮಾಡಿದ ಮೇಲೆ ಆ ಮೂರ್ತಿ 1898ರಲ್ಲಿ ಮತ್ತೆ ಪುನಃ ಅನಾವರಣಗೊಂಡಿತು. ಆ ರಸಾಯನ ತಯಾರಿಸಿ ಸ್ವಚ್ಛ ಮಾಡಿದವರು ಒಬ್ಬ ಭಾರತೀಯನೇ. ಶ್ರೀ ಟಿ.ಕೆ. ಗುಜ್ಜರ್ ಎಂದು ಅವರ ಹೆಸರು! ಈ ಘಟನೆ ನಡೆದುದು ಸ್ವಾತಂತ್ರ್ಯಕ್ಕೆ ಅರ್ಧಶತಮಾನ ಮುಂಚೆ.

ಸ್ವಾತಂತ್ರ್ಯದ ನಂತರ 1965ರ ವರೆಗೂ ಈ ಮೂರ್ತಿಗಳು ಅವುಗಳನ್ನು ಸ್ಥಾಪಿಸಿದ ಸ್ಥಳಗಳಲ್ಲಿಯೇ ಇದ್ದವು. ಆದರೆ ಆ ನೋಟ ಆಂಗ್ಲರ ಮೇಲೆ ರೊಚ್ಚಿಗೆದ್ದ ನಮ್ಮ ಜನರಿಗೆ ಸಹನವಾಗಲಿಲ್ಲವೇನೋ. ಒಂದು

ಸ್ಥಾಪಿತವಾಗಿದ್ದ ಸ್ಥಳದಲ್ಲಿ ಮಂಟಪದೊಂದಿಗೆ –



ಮೂರ್ತಿಯ ಮೂಗು ಮುರಿದರೆ ಇನ್ನೊಂದು ಮೂರ್ತಿಯ ಕೈಯೇ ಕಳಚಿ ಹೋಯಿತು. ಕೆಲವದರ ರುಂಡಗಳು ಉರುಳಿದವು. ಈ ಮೂರ್ತಿಗಳನ್ನು ಆ ಸ್ಥಳಗಳಿಂದ ಕಣ್ಮರೆ ಮಾಡಬೇಕೆಂಬ ಜನರ ಬಯಕೆಯನ್ನು 18 ವರ್ಷಗಳ ಕಾಲವೂ ನಮ್ಮ ಸರಕಾರ ಈಡೇರಿಸದಿದ್ದರಿಂದಲೋ ಅಥವಾ ಆ ಮೂರ್ತಿಗಳನ್ನು ಸ್ಥಳಾಂತರಿಸದಿದ್ದರೆ ಅವನ್ನು ನಾಶಪಡಿಸುವ ಬೆದರಿಕೆ ಹಾಕಿದ್ದರಿಂದಲೋ ಈ ಎಲ್ಲಾ ಮೂರ್ತಿಗಳೂ ಒಂದೇ ರಾತ್ರಿ ದಿನಾಂಕ 12ನೆಯ ಆಗಸ್ಟ್ 1965ರಂದು ಈಗ ಅವು



ಥಾಮಸ್ ಬ್ಲಾನ್ಸಿ.
ಈ ಮೂರ್ತಿ ಭಾಟಿಯಾ ಬಾಗಿನಲ್ಲಿ ಸ್ಥಾಪಿತವಾಗಿತ್ತು. ಇದನ್ನು ಕಟೆದ ಕಲಾಕಾರ: ಜಿ. ಬಿ. ವಿಲ್ಲಾ.

ಗಳನ್ನು ಕೊಳೆಹಾಕಿದ್ದ ಸ್ಥಳಕ್ಕೆ ಮುಂಬೈ ಮುನ್ಸಿಪಲ್ ಕಾರ್ಪೋರೇಶನ್ ಅವರಿಂದ ಸಾಗಿಸಲ್ಪಟ್ಟವು! ಈಗ ಈ ಸ್ಥಳ ಆ ಮೂರ್ತಿಗಳಿಗೆ ರುದ್ರಭೂಮಿಯಾಗಿದೆ.

ಆಂಗ್ಲರು ಬರುವ ಮುಂಚೆ ಈ ದೇಶವನ್ನು ಆಕ್ರಮಿಸಿದವರು ಮುಸ್ಲಿಮರು. ಅವರು ರಾಜ್ಯ ಬೆಳೆಸುವ ದಾಹದ ಜೊತೆಗೆ ಕಡ್ಡಾಯವಾಗಿ ತಮ್ಮ ಧರ್ಮವನ್ನೂ ನಮ್ಮವರ ಮೇಲೆ ಹೇರಲು, ಇಲ್ಲಿಯ ಧರ್ಮಗಳನ್ನು ಅಳಿಸಲೂ ಪ್ರಯತ್ನಿಸಿದರು. ಇದಕ್ಕೆ ಉದಾಹರಣೆಯೆಂದರೆ, ನಮ್ಮ ಸಂಸ್ಕೃತಿಯ ಕೇಂದ್ರಗಳಾಗಿದ್ದ ಮಠ, ಮಂದಿರ, ಗುಡಿ-ಗುಡಾರಗಳನ್ನು ದಯೆ-ದಾಕ್ಷಿಣ್ಯವಿಲ್ಲದೇ ನಾಶಮಾಡಿದ ಕುರುಹುಗಳೂ ದೇಶದ ತುಂಬ ಸಿಗುವದಿಲ್ಲವೇ? ಆಂಗ್ಲರೂ ತಮ್ಮ ಧರ್ಮ ಪ್ರಚಾರ ಮಾಡಲು ಪ್ರಯತ್ನಿಸಿಲ್ಲವೆಂದು ನಾನು ಹೇಳಲಾರೆ. ಆದರೆ ಆ ವಿಷಯದಲ್ಲಿ ಅವರ ರೀತಿಯೇ ಬೇರೆಯಾಗಿತ್ತು. ಆದರೆ ಹಾಗೆ ಮಾಡುವಲ್ಲಿ ಅವರೆಂದೂ ಇದ್ದುದನ್ನು ನಾಶ ಮಾಡಲಿಲ್ಲ. ಅಲ್ಲದೇ ಪ್ರಾಚೀನ ವಸ್ತು, ವಾಸ್ತು, ಕಲೆ, ಸಂಸ್ಕೃತಿಯನ್ನು ಹೇಗೆ ಕಾಯ್ದುಕೊಳ್ಳಬೇಕೆಂಬುದನ್ನು ಬಹುಶಃ ಅವರೇ ನಮಗೆ ಕಲಿಸಿದವರು ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ಇಂದು ಯಾವುದೇ ಪ್ರಾಚ್ಯ ವಸ್ತುವಿನ ಬಗ್ಗೆ ತಿಳಿಯಬೇಕೆಂದರೆ ಆಂಗ್ಲರು ಬರೆದ ಹೊತ್ತಿಗೆಗಳೇ ನಮಗೆ ಆಧಾರಗ್ರಂಥಗಳು!!

1977ನೆಯ ಇಸವಿಯಲ್ಲಿ ಅಂದರೆ ಅವು ಧೂಳು ತಿನ್ನಲು ಪ್ರಾರಂಭವಾದ 12 ವರ್ಷಗಳ ನಂತರ ಆಗಿನ ಮಹಾರಾಷ್ಟ್ರ ಕಲಾ ನಿರ್ದೇಶಕರು ಕಲಾಪೂರ್ಣವಾದ ಈ ಮೂರ್ತಿಗಳನ್ನು ಕಲಾಶಾಲೆಯ ಈ ವಿಷಯದ ವಿದ್ಯಾರ್ಥಿಗಳಿಗೆ ಮಾದರಿಯಾದಾವು ಎಂಬ ಒಂದು ಸದುದ್ದೇಶದಿಂದ ಈ ಮೂರ್ತಿಗಳನ್ನು ಜೆ.ಜೆ. ಸ್ಕೂಲ್ ಆಫ್ ಆರ್ಟ್ಸ್‌ಗೆ ಸಾಗಿಸಲು ಪ್ರಯತ್ನಿಸಿದರು. ಆದರೆ ಅದು ಕೈಗೂಡಲಿಲ್ಲ. ಈ ಯೋಜನೆ ಸಫಲವಾಗಿದ್ದರೆ. ಮೂರ್ತಿಗಳು ಚೆನ್ನಾಗಿ ಉಳಿಯುತ್ತಿದ್ದವಲ್ಲದೆ, ಮುಕ್ಕಾದ ಮೂರ್ತಿಗಳನ್ನು ಶಾಸ್ತ್ರೀಯವಾಗಿ ಸರಿಪಡಿಸುವ ಪ್ರಯತ್ನವನ್ನು ಈ ಶಾಲೆಯವರು ಕೈಗೊಳ್ಳುವ ಯೋಜನೆಯೂ ಇತ್ತೆಂದು ಕೇಳಿದ್ದೇನೆ.



ರಿಚಾರ್ಡ್ ಟೆಂಪಲ್. (ಮುಂಬೈ ಗವರ್ನರ್) ಓವಲ್ ಮೈದಾನದಲ್ಲಿ (ಸ್ಥಾಪಿತವಾಗಿದ್ದ ಸ್ಥಳದಲ್ಲಿ) ಮೂರ್ತಿಕಾರ: ಬ್ರುಕ್ ಟ. ಆರ್.

### ವಿದೇಶಿಯರಿಂದ ಬೇಡಿಕೆ

ಶಿವಸೇನೆಯ ಮನೋಹರ ಜೋಶಿಯವರು ಮುಂಬೈಯ ಮೇಯರ್ ಆಗಿದ್ದ ಸಮಯದಲ್ಲಿ ಕೆನಡಾದ, ಹ್ಯಾಮಿಲ್ಟನ್‌ನಗರ ಊರಹಿರಿಯರಾಗಿದ್ದ ಮಿ। ರೆಗ್ ವ್ಹೀಲರ್ ಎಂಬುವವರು ಇಲ್ಲಿಯ ಮೇಯರ್‌ಗೆ ಬರೆದು: 'ನಾವು ವಿಕ್ಟೋರಿಯಾ ಮಹಾರಾಣಿಯ ಒಂದು ಉತ್ಕೃಷ್ಟ ಮೂರ್ತಿಗಾಗಿ ಹುಡುಕುತ್ತಿದ್ದೇವೆ. ಕಾರಣ – ನಮ್ಮ ದೇಶದ ರಾಜಕೀಯ ಒಪ್ಪಂದದ ಸಮಯದಲ್ಲಿ ವಿಕ್ಟೋರಿಯಾ ಮಹಾರಾಣಿಯಾಗಿದ್ದು ಆ ಮೂರ್ತಿಯನ್ನು ಅಲ್ಲಿಯ ಒಪ್ಪಂದ-ಉದ್ಯಾನದಲ್ಲಿ ಸ್ಥಾಪಿಸಿ, ನಮ್ಮ ಮರ್ಯಾದೆಯನ್ನು ಸಲ್ಲಿಸಲಿಕ್ಕಿದೆ' ಎಂದು ತಿಳಿಸಿ ಇಲ್ಲಿಯ ಮೂರ್ತಿಯನ್ನು ಬೇಡಿದ್ದರು. ಹೀಗೆ ಕೇಳಲು ಕಾರಣವೂ ಇತ್ತು. ಈಗಾಗಲೇ ಭಾರತದಿಂದ ಏಳನೆಯ ಕಿಂಗ್ ಎಡ್ವರ್ಡ್‌ನ ಮೂರ್ತಿಯನ್ನು ಈ ದೇಶವು ಭಾರತದಿಂದ ಪಡೆದು ಆಗಿತ್ತು. (ಮುಂಬೈಯಿಂದ ಅಲ್ಲ)

ಜೋಶಿಯವರು, ತಾವು ಈ ವಿಷಯದಲ್ಲಿ ಏನೂ ನಿರ್ಣಯ ತೆಗೆದುಕೊಳ್ಳದೇ ವಿಷಯವನ್ನು ಉಳಿದ ಹಿರಿಯರಿಗೆ ತಿಳಿಸಿದರು. ಆಗ ಕಮಿಶನರ್ ಆಗಿದ್ದವರು – 'ಹೀಗೆ ಮಾಡುವದು ಸರಿಯಲ್ಲ. ಬ್ರಿಟಿಷರ ಪ್ರತಿಮೆಗಳನ್ನು ಮಾರಿದ್ದರಿಂದ ಚರಿತ್ರೆಯನ್ನು ಬದಲಾಯಿಸಿದಂತಾಗುವುದಿಲ್ಲ' ಎಂದು ಹೇಳಿದರು.



← ಮಾರ್ಕ್ವಿಸ್ ಆಫ್ ವೆಲ್ಸ್ಲಿ (ಡ್ಯೂಕ್ ಆಫ್ ವೆಲಿಂಗ್ಟನ್)



ಎಲಿಫನ್‌ಸ್ಟನ್ ಗಾರ್ಡನ್‌ನಲ್ಲಿ ಮೆರೆಯುತ್ತಿದ್ದಾಗ. →

ವಿಕ್ಟೋರಿಯಾ ಮಹಾರಾಣಿಯ ಈ ಮೂರ್ತಿಯನ್ನು ಸ್ಥಾಪಿಸುವಲ್ಲಿ ಆಸ್ಥೆ ವಹಿಸಿದವರು, ಬರೋಡೆಯ ರಾಜರಾಗಿದ್ದ ಶ್ರೀ ಖಂಡೇರಾವ್ ಗಾಯಕವಾಡರು. ಶಿಲ್ಪಿ 'ನೋಬಲ್'. 1872ರಲ್ಲಿ ತಯಾರಾದ ಈ ಮೂರ್ತಿಗೆ ತಗಲಿದ ನಿರ್ಮಾಣ ವೆಚ್ಚ 1,80,000 ರೂ.ಗಳು. ಈ ಮೂರ್ತಿ ರಾಣಿಯ ಪತಿಯಾಗಿದ್ದ ಅಲ್ಬರ್ಟ್‌ನ ಪಕ್ಕದಲ್ಲಿ ಅಲ್ಬರ್ಟ್ ವಸ್ತು ಸಂಗ್ರಹಾಲಯದಲ್ಲೇ ಸ್ಥಾಪಿತವಾಗಬೇಕಿತ್ತು. ಆದರೆ, ಖಂಡೇರಾಯರು, ಅದು 'ವೊವಲ್'ನಲ್ಲಿಯೇ (ಈಗ ಓವರ್‌ಸೀಸ್ ಕಮ್ಯುನಿಕೇಶನ್ ಇದ್ದ ಸ್ಥಳದಲ್ಲಿಯೇ) ಇರಲಿ ಎಂದರು. ಆ ಸಮಯದಲ್ಲಿ ಬೇರ್ಪಟ್ಟ ಸತಿ-ಪತಿಯರ ಮೂರ್ತಿಗಳು ಖಾಯಂ ಆಗಿ ದೂರಾದುವು. ರಾಣಿಯ ಹೆಸರಿನಲ್ಲಿ ವಿಕ್ಟೋರಿಯಾ ಗಾರ್ಡನ್ – ಅವಳ ಪತಿಯ ಹೆಸರಿನಲ್ಲಿ ಅಲ್ಬರ್ಟ್ ಮ್ಯುಜಿಯಮ್ ಅಕ್ಕಪಕ್ಕದಲ್ಲಿ ನಿರ್ಮಾಣವಾಗಿದ್ದವು.

ವಿಕ್ಟೋರಿಯಾ ರಾಣಿಯ ಮುಂಡ ಮುರಿದುದು ಅದನ್ನು ಸಾಗಿಸುವ ಕೆಲಸಗಾರರಿಂದ.

### ಹೊಸ ಯೋಜನೆ

1965ರ ಆಗಸ್ಟ್‌ನಲ್ಲಿ ಇವನ್ನು ಸಾಗಿಸುವ ಅವಸರದ ವೇಳೆಯಲ್ಲಿ ಕೆಲವು ತಜ್ಞರು – ಬಂಗಾಲದ ಸರ್ ಜಾದುನಾಥ್ ಸರಕಾರ್, ಮಹಾರಾಷ್ಟ್ರದ ಮಹಾಪೋಧ್ಯಾಯ ಡಿ. ವಿ. ಪೋದಾರ ಇಂಥವರು, ಈ ಮೂರ್ತಿಗಳು ಬ್ರಿಟಿಷರದ್ದು, ಅವು ಸಾರ್ವಜನಿಕ ಮುಖ್ಯಸ್ಥಳಗಳಲ್ಲಿರಿಸುವುದು ಬೇಡವೆಂದರೂ – ಅವು ಐತಿಹಾಸಿಕ ಕುರುಹುಗಳಾದ್ದರಿಂದ ಅವನ್ನು ಸುರಕ್ಷಿತ ಸ್ಥಳದಲ್ಲಿರಿಸುವುದು ನಮ್ಮ ಕರ್ತವ್ಯ ಎಂದು ಹೇಳಿದ್ದಾರೆ.

ಮುಂಬೈಯಲ್ಲಿ 'ಕುರ್ಲಾ-ಬಾಂದ್ರಾ ಕಾಂಪ್ಲೆಕ್ಸ್' ಒಂದು ದೊಡ್ಡ ಯೋಜನೆ. ಈ ಕಾಂಪ್ಲೆಕ್ಸ್‌ನಲ್ಲಿ ಒಂದು ವಸ್ತು ಸಂಗ್ರಹಾಲಯವೂ ಬರಲಿದೆ. ಆ ಸಂಗ್ರಹಾಲಯಕ್ಕೆ ಈಗ ಜೀಜಾಮಾತಾ ಉದ್ಯಾನದಲ್ಲಿ ಕೊಳೆಯುತ್ತಿರುವ ಮೂರ್ತಿಗಳು ಬರಲಿಕ್ಕಿವೆ ಎಂದು ಹೇಳುತ್ತಾರೆ. ಆದರೆ ಅದು ಯಾವಾಗ... ? ಕಾದು ನೋಡಬೇಕು. ○



↑ ಮಾರ್ಕಿಸ್ ಆಫ್ ಕಾರ್ನ್‌ವಾಲ್ಸ್
ಮೂರ್ತಿಕಾರ : ಬಾಕನ್.

ಎಲಿಫನ್‌ಸ್ಟನ್ ಗಾರ್ಡನ್‌ನಲ್ಲಿಯೇ ಸಾಲಂಕೃತವಾಗಿದ್ದಾಗ. ↓





ಪಾಟ್ರಿಕ್ ಶೆಲ್ಲಿ.
ಮೂರ್ತಿಕಾರ : ಗೋರೆಗಾಂವ್‌ಕರ್. (ಭಾರತೀಯ) ಈ ಮೂರ್ತಿ ಕ್ರಾಫರ್ಡ್ ಮಾರ್ಕೆಟನ್ ಹತ್ತಿರವಿರುವ ಪೊಲೀಸು ಹೆಡ್ ಆಫೀಸ್ ಬಳಿ ಸ್ಥಾಪಿತವಾಗಿತ್ತು.

ಎಚ್. ಈ. ಲಾಡ್ ಸಂಧರ್‌ಸ್ಟ (ಮುಂಬಯಿ ಗವರ್ನರ್) ಮೂರ್ತಿಕಾರ : ವಿಲಿಯಮ್ ಮ್ಯಾನ್ಸ್‌ಫೀಲ್ಡ್. ಚರ್ಚ್‌ಗೇಟಿನಲ್ಲಿ ಈ ಮೂರ್ತಿ ಕಂಗೊಳಿಸುತ್ತಿದ್ದಾಗ. →



MCA/MHB/101 Kan

# ಶುಭ್ರತೆಯ ಪರಂಪರೆ....
# ಮೈಸೂರ್ ಬಾರ್ ಸೋಪಿನಿಂದ

ಕರ್ನಾಟಕದ ಗೃಹಿಣಿಯರ ನೆಚ್ಚಿನ ಸಂಗಾತಿ ಮೈಸೂರ್ ಬಾರ್ ಸೋಪ್. ಈಗ ಹಿಂದೆಂದಿಗಿಂತಲೂ ಹೆಚ್ಚು ಉತ್ತಮ. ಹೆಚ ಪರಿಣಾಮಕಾರಿ. ಬಟ್ಟೆಗಳ ಕೊಳೆ ನಿವಾರಿಸಿ ಹೊಳಪು ನೀಡುವ ಅದರ ಮರ್ಮವನ್ನು ಬಳಸಿದವರೇ ಬಲ್ಲರು. ಇಂದೇ ಬಳಸಿ ನೋಡಿ.




Parade/BE/8508

## ಒಗೆತದ ಸಹಭಾಗಿ

ಉತ್ಪಾದಕರು : ಕರ್ನಾಟಕ ಸೋಪ್ಸ್ ಅಂಡ್ ಡಿಟರ್ಜೆಂಟ್ಸ್ ಲಿಮಿಟೆಡ್. ಮಾರುಕಟ್ಟೆಗೆ ನೀಡುವವರು : ಮೈಸೂರ್ ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿ